ಲಿಖಿತ ಮೂಲಕ ಉತ್ತರಿಸುವ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಗುರುವಾರ, ದಿನಾಂಕ : 12 ನೇ ಮಾರ್ಚ್, 2020

KREDL ಗುತ್ತಿ ನೌಕರರ ಬಗ್ಗೆ

ಶ್ರೀ ಆರ್. ಚೌಡರೆಡ್ಡಿ ತೂಪಲ್ಲಿ (ಪದವೀಧರರ ಕ್ಷೇತ್ರ) :-

706 (1004) ಮಾನ್ಯ ಮುಖ್ಯಮಂತ್ರಿಗಳು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಗಮ ನಿಯಮಿತ KREDL ಸಂಸ್ಥೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದ 48 ಗುತ್ತಿಗೆ ನೌಕರರ ಪೈಕಿ ಎಷ್ಟು ಜನರನ್ನು ಖಾಯಂ ಪ್ರಕ್ರಿಯೆಯಿಂದ ಕೈಬಿಡಲಾಯಿತು ; ಕೈಬಿಡಲು ಕಾರಣಗಳೇನು; ವಿವರವಾಗಿ ಹೆಸರು ಹುದ್ದೆಯ ಪದನಾಮ, ವಿದ್ಯಾರ್ಹತೆ, ಹಾಗೂ ಇವರು ಮಾಸಿಕ ಪಡೆಯುತ್ತಿದ್ದ ವೇತನ ಮಾಹಿತಿ ನೀಡುವುದು;

(ಆ) ಖಾಯಂ ಪ್ರಕ್ರಿಯೆಯಿಂದ ಕೈಬಿಟ್ಟ ನೌಕರರನ್ನು ಈ ಮೊದಲು ಖಾಯಂ ಮಾಡಿದ ನೌಕರರಂತೆ ಸರಿಸಮನಾಗಿ (On par with) ಖಾಯಂ ಮಾಡುವಂತೆ ಮಾನ್ಯ ಉಚ್ಚ ನ್ಯಾಯಾಲಯವು ಆದೇಶ ಮಾಡಿರುವುದು ನಿಜವೇ ;

(ಇ) ಈ ಸಂಬಂಧ ಕಾನೂನು ಇಲಾಖೆಯು ಇವರನ್ನು ಅವರಿಗೆ ಸರಿಸಮನಾಗಿ ವಿಲೀನಗೊಳಿಸುವಂತೆ ಅಭಿಪ್ರಾಯ ನೀಡಿದ್ದು,

ಈ ಅಭಿಪ್ರಾಯಕ್ಕೆ ಮಾನ್ಯ ಸಚಿವರು ಅನುಮೋದನೆ ನೀಡಿದ್ದರೂ ಕೂಡಾ ಅಧಿಕಾರಿಗಳು ಇವರನ್ನು ಖಾಯಂ ಮಾಡದಿರಲು ಕಾರಣಗಳೇನು ;

(ಈ) ಮಾನ್ಯ ಉಚ್ಚನ್ಯಾಯಾಲಯದ ಆದೇಶವು ಸಂವಿಧಾನದ ವಿಧಿ ಅನ್ವಯ ಇಲಾಖೆಗೆ ಬೈಡಿಂಗ್ ಅಲ್ಲವೇ ; ಹಾಗಾದರೆ ಈ ಆದೇಶವನ್ನು ಏಕೆ ಜಾರಿಗೊಳಿಸಲಿಲ್ಲ ; ಹಾಗೂ ಮೇಲ್ಮನವಿಯನ್ನು ಹಾಕದಿರುವುದಕ್ಕೆ ಕಾರಣಗಳೇನು ;

(ಉ) ಕಳೆದ 12 ವರ್ಷಗಳಿಂದ ಹೋರಾಟ ನಡೆಸುತ್ತಿರುವ ನೊಂದ ಈ ಅಭ್ಯರ್ಥಿಗಳನ್ನು ಸರ್ಕಾರವು ಯಾವ ಕಾಲಮಿತಿಯೊಳಗೆ ಮಾನ್ಯ ಉಚ್ಚನ್ಯಾಯಾಲಯದ ಆದೇಶದಂತೆ KREDL ಸಂಸ್ಥೆಯಲ್ಲಿ ಖಾಯಂ ಆಗಿ ವಿಲೀನಗೊಳಿಸಿ ಆದೇಶ ಹೊರಡಿಸಿ ನ್ಯಾಯ ಒದಗಿಸಲಾಗುವುದು ?